## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 772
ಸದಸ್ಯರ ಹೆಸರು : ಶ್ರೀ ಎಸ್.ವ್ಹಿ. ಸಂಕನೂರ
ಉತ್ತರಿಸುವ ದಿನಾಂಕ : 17.12.2018
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಘದ ವಸತಿ ಶಾಲೆಗಳಲ್ಲಿ ಖಾಯಂ ಆಗಿ ನೇಮಕಗೊಂಡಿರುವ ಸಹ ಶಿಕ್ಷಕರು, ಪ್ರಾಂಶುಪಾಲರ ವರ್ಗಾವಣೆ ಮಾಡುವ ಬಗ್ಗೆ ಇಲಾಖೆಯಲ್ಲಿ ನಿರ್ದಿಷ್ಟವಾದ ನಿಯಮಾವಳಿಗಳನ್ನು ರೂಪಿಸಲಾಗಿದೆಯೇ; ಹಾಗಿದ್ದಲ್ಲಿ, ಆ ಕುರಿತು ಮಾಹಿತಿಯನ್ನು ನೀಡುವುದು; | ನಿರ್ದಿಷ್ಟ ಮಾರ್ಗಸೂಚಿಗಳನ್ನು ರಚಿಸಲಾಗಿದೆ. ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಆ) | ಪ್ರಾಥಮಿಕ, ಪ್ರೌಢ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಗಳಲ್ಲಿ ಕೌನ್ಸಲಿಂಗ್ ಮೂಲಕ ವರ್ಗಾವಣೆ ಮಾಡುವ ಪದ್ಧತಿಯಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆಗಳಲ್ಲಿಯ ಶಿಕ್ಷಕ ಹಾಗೂ ಪ್ರಾಂಶುಪಾಲರ ವರ್ಗಾವಣೆ ಮಾಡುವ ನೀತಿಯನ್ನು ಜಾರಿಗೆ ತರಲು ಸರ್ಕಾರ ಚಿಂತನೆ ನಡೆಸಿದೆಯೇ; ಈ ಕುರಿತು ಸರ್ಕಾರದ ನೀತಿ ಏನು? (ವಿವರ ನೀಡುವುದು) | ಈಗಾಗಲೇ ಆದೇಶ ಸಂಖ್ಯೆ: ಸಕಇ 425 ಮೊದೇಶಾ 2018, ದಿನಾಂಕ:31-07-2018 ರ ಪ್ರಕಾರ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. |

ಸಕಇ 639 ಮೊದೇಶಾ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು.

ಅನುಬಂಧ (1)

**ಸರ್ಕಾರದ ಆದೇಶ ಸಂಖ್ಯೆ: ಸಕಇ 425 ಮೂದೇಶಾ 2018, ದಿನಾಂಕ:31-07-2018**

**ಅನುಬಂಧ-1**

**ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿ ಬರುವ ವಸತಿ ಶಾಲೆಗಳ ಪ್ರಾಂಶುಪಾಲರು/ಶಿಕ್ಷಕರು ಮತ್ತು ಇತರ ಸಿಬ್ಬಂದಿಗಳ ವರ್ಗಾವಣಾ ಮಾರ್ಗಸೂಚಿಗಳು-2018**

ಸರ್ಕಾರ ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿರುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ. ಪ್ರಸ್ತುತ ಸುಮಾರು 818 ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ ಹಾಗೂ ಇವುಗಳಲ್ಲಿ ಸುಮಾರು 1.60 ಲಕ್ಷ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಈ ವಸತಿ ಶಾಲೆಗಳಿಗೆ ಪ್ರಾಂಶುಪಾಲರು, ಶಿಕ್ಷಕರನ್ನು ಹಾಗೂ ಬೋಧಕೇತರ ಸಿಬ್ಬಂದಿಗಳನ್ನು ನಿಯಮಾನುಸಾರ ನೇಮಕಾತಿ ಮಾಡಲಾಗುತ್ತಿದೆ.

ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣವನ್ನು ಒದಗಿಸಲು ಸರ್ಕಾರದಿಂದ ಪ್ರತಿಯೊಂದು ಹೋಬಳಿ ಕೇಂದ್ರದಲ್ಲಿ ವಸತಿ ಶಾಲೆಯನ್ನು ಪ್ರಾರಂಭಿಸಲಾಗಿದೆ. ಈ ಉದ್ದೇಶವನ್ನು ಈಡೇರಿಸಲು ಸಂಘದ ಎಲ್ಲಾ ಸಿಬ್ಬಂದಿಗಳು ತಮ್ಮ ತಮ್ಮ ಕರ್ತವ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಿದಲ್ಲಿ ಮಾತ್ರ ಈ ಉದ್ದೇಶ ಈಡೇರಬಹುದು. ಆದರೆ, ಈ ಸಿಬ್ಬಂದಿಯ ವರ್ಗಾವಣೆಗಳನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ಪಾರದರ್ಶಕವಾಗಿ ಇರುವ ರೀತಿಯಲ್ಲಿ ಮಾಡಬೇಕಾಗಿದೆ. ಇದರ ಹಿನ್ನಲೆಯಲ್ಲಿ, ಸದರಿ ವಸತಿ ಶಾಲೆಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಮತ್ತು ವರ್ಗಾವಣೆಗಳನ್ನು ಪಾರದರ್ಶಕವಾಗಿ ಮಾಡಲು ಈ ಕೆಳಗಿನಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆಗಳ ಪ್ರಾಂಶುಪಾಲರು/ಶಿಕ್ಷಕರು ಮತ್ತು ಇತರ ಸಿಬ್ಬಂದಿಯವರ ವರ್ಗಾವಣಾ ಮಾರ್ಗಸೂಚಿಗಳು 2018ನ್ನು ರಚಿಸಲಾಗಿದೆ.

1) ವರ್ಗಾವಣಾ ಮಾರ್ಗಸೂಚಿಗಳು 2018 ವಸತಿ ಶಾಲೆ/ಕಾಲೇಜಿನ ಖಾಯಂ ಸಿಬ್ಬಂದಿಯಾದ ಪ್ರಾಂಶುಪಾಲರು, ಉಪನ್ಯಾಸಕರು/ಶಿಕ್ಷಕರು ಮತ್ತು ಶಿಕ್ಷಕೇತರರಿಗೆ ಅನ್ವಯವಾಗುತ್ತದೆ.

2) ವಿವಿಧ ಸಿಬ್ಬಂದಿಗಳು ಒಂದೇ ಸ್ಥಳದಲ್ಲಿ ನಿರ್ವಹಿಸಬೇಕಾಗಿರುವ ಕನಿಷ್ಠ ಸೇವಾವಧಿ ವಿವರ:-

(ಎ) ಪ್ರಾಂಶುಪಾಲರು (ಶಾಲೆ/ಕಾಲೇಜು) - 3 ವರ್ಷಗಳು

(ಬಿ) ಉಪನ್ಯಾಸಕರು/ಶಿಕ್ಷಕರು - 4 ವರ್ಷಗಳು

(ಸಿ) ವಾರ್ಡನ್ - 3 ವರ್ಷಗಳು

(ಡಿ) ಪ್ರಥಮ/ದ್ವಿತೀಯ ದರ್ಜೆ ಸಹಾಯಕರು/ಶುಶ್ರೂಷಕರು - 4 ವರ್ಷಗಳು

(ಇ) ಗ್ರೂಪ್-ಡಿ - 7 ವರ್ಷಗಳು

ಮೇಲ್ಕಂಡಂತೆ ಕನಿಷ್ಠ ಸೇವಾವಧಿ ಪೂರೈಸಿದ ನಂತರ ವರ್ಗಾವಣೆ ಮಾಡತಕ್ಕದ್ದು.

3) ಎ) ಪ್ರಾಂಶುಪಾಲರು, ಉಪನ್ಯಾಸಕರು/ಶಿಕ್ಷಕರು ಹಾಗೂ ವಾರ್ಡನ್‌ಗಳನ್ನು ಅವರ ಸ್ವಂತ ತಾಲ್ಲೂಕಿಗೆ ವರ್ಗಾವಣೆ ಮಾಡತಕ್ಕದ್ದಲ್ಲ. ಕನಿಷ್ಠ ಅವಧಿ ಮುಗಿದ ನಂತರ ಸದರಿಯವರ ಸ್ವಂತ ತಾಲ್ಲೂಕನ್ನು ಹೊರತುಪಡಿಸಿ ಇತರ ತಾಲ್ಲೂಕುಗಳಿಗೆ ವರ್ಗಾವಣೆಗೊಳಿಸುವುದು.

ಬಿ) ಶಿಕ್ಷಕೇತರ ಸಿಬ್ಬಂದಿಗಳನ್ನು ಅವರುಗಳ ಸ್ವಂತ ಹೋಬಳಿಯಲ್ಲಿರುವ ಶಾಲೆಗಳಿಗೆ ವರ್ಗಾವಣೆ ಮಾಡತಕ್ಕದ್ದಲ್ಲ. ಆದರೆ ಅದೇ ಅಥವಾ ಇತರೆ ತಾಲ್ಲೂಕಿನಲ್ಲಿರುವ ಕಾಲೇಜು/ಶಾಲೆಗಳಿಗೆ ವರ್ಗಾವಣೆ ಮಾಡುವುದು.

ಸಿ) <u>ಸಂಘದ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪತಿ-ಪತ್ನಿ ಪ್ರಕರಣಗಳಲ್ಲಿ</u>

i) ಕವಶಿಸಂ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪತಿ-ಪತ್ನಿ ಸಿಬ್ಬಂದಿಗಳ ಪ್ರಕರಣಗಳಲ್ಲಿ ಇಬ್ಬರನ್ನೂ ಒಂದೇ ವಸತಿ ಶಾಲೆಗೆ ವರ್ಗಾಯಿಸುವಂತಿಲ್ಲ. ಬದಲಿಗೆ, ಒಂದೇ ತಾಲ್ಲೂಕಿನ ಅಥವಾ ಇತರ ತಾಲ್ಲೂಕಿನ ವಸತಿ ಶಾಲೆಗಳಿಗೆ ವರ್ಗಾಯಿಸುವುದು.

(ii) <u>ಪತಿ-ಪತ್ನಿ ಪ್ರಕರಣಗಳು:</u> ಪತಿ ಅಥವಾ ಪತ್ನಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಇಲಾಖೆ/ಸಂಸ್ಥೆಗಳಲ್ಲಿನ ಸೇವೆ ಸಲ್ಲಿಸುತ್ತಿರುವ ಸಿಬ್ಬಂದಿಗಳ ಪ್ರಕರಣಗಳಲ್ಲಿ ಇಬ್ಬರಲ್ಲಿ ಒಬ್ಬರು ವರ್ಗಾವಣೆಗೊಂಡಲ್ಲಿ ಆಗ ಇನ್ನೊಬ್ಬರನ್ನು ಅದೇ ಸ್ಥಳದಲ್ಲಿ ವಸತಿ ಶಾಲೆ/ಖಾಲಿ ಹುದ್ದೆ ಲಭ್ಯತೆ ಇದ್ದಲ್ಲಿ ಮಾತ್ರ ವರ್ಗಾಯಿಸಬಹುದು. ವಸತಿ ಶಾಲೆ ಇಲ್ಲದೇ ಇದ್ದಲ್ಲಿ ಸಮೀಪದ ವಸತಿ ಶಾಲೆಗೆ ವರ್ಗಾಯಿಸುವುದು. ಈ ಪ್ರಕರಣಗಳಲ್ಲಿ ಕನಿಷ್ಠ ಸೇವಾವಧಿ ನಿಯಮ ಅನ್ವಯಿಸುವುದಿಲ್ಲ.

4) <u>ವಯೋನಿವೃತ್ತಿ ಅಂಚಿನಲ್ಲಿರುವ [illegible]</u> ವಯೋನಿವೃತ್ತಿ ಹೊಂದುವ 2 ವರ್ಷಗಳ ಇರುವ ಎಲ್ಲಾ ಸಿಬ್ಬಂದಿಗಳು ಅವರುಗಳು ಆಯ್ಕೆ ಮಾಡಿಕೊಳ್ಳುವ ಸ್ಥಳಗಳಿಗೆ ಹುದ್ದೆ ಖಾಲಿ ಇದ್ದಲ್ಲಿ ವರ್ಗಾವಣೆ ಮಾರ್ಗಸೂಚಿಗಳನ್ನು ಸಡಿಲಿಸಿ ವರ್ಗಾಯಿಸುವುದು.

5) ಅನುಬಂಧ-4 ರಲ್ಲಿ ತೋರಿಸಲಾದ ತೀವ್ರ ಅನಾರೋಗ್ಯ ಪ್ರಕರಣಗಳಲ್ಲಿ ವರ್ಗಾವಣೆ ಮಾರ್ಗಸೂಚಿಗಳನ್ನು ಸಡಿಲಿಸಿ ಅಂತಹ ಸಿಬ್ಬಂದಿಗಳನ್ನು ಮಾನವೀಯತೆ ದೃಷ್ಟಿಯಿಂದ ಅವರುಗಳು ಕೋರಿರುವ ಸ್ಥಳಗಳಿಗೆ ಖಾಲಿ ಹುದ್ದೆಗಳಿದ್ದಲ್ಲಿ ವರ್ಗಾಯಿಸುವುದು.

6) ಪರಸ್ಪರ ವರ್ಗಾವಣೆ ಪ್ರಕರಣಗಳಲ್ಲಿ ವರ್ಗಾವಣೆ ಮಾರ್ಗಸೂಚಿಯಲ್ಲಿರುವ ಷರತ್ತುಗಳಿಗೊಳಪಟ್ಟು ಪರಸ್ಪರ ವರ್ಗಾವಣೆ ಕೋರಿ ಅರ್ಜಿ ಸಲ್ಲಿಸಿದ್ದಲ್ಲಿ, ಅಂತಹ ಪ್ರಕರಣಗಳನ್ನು ಪರಿಗಣಿಸಬಹುದು.

7) ದೂರು ಪ್ರಕರಣಗಳಲ್ಲಿ ಯಾವುದೇ ಸಿಬ್ಬಂದಿ/ನೌಕರರ ಮೇಲೆ ಗಂಭೀರ ಸ್ವರೂಪದ ದೂರುಗಳು ಬಂದಲ್ಲಿ ಮೇಲ್ನೋಟಕ್ಕೆ ಸದರಿ ದೂರುಗಳಲ್ಲಿ ಸತ್ಯಾಂಶ ಕಂಡು ಬಂದಲ್ಲಿ ಅವರನ್ನು ತಕ್ಷಣವೇ ಆ ಸ್ಥಳದಿಂದ ಬೇರೆ ಜಿಲ್ಲೆಗಳಿಗೆ ವರ್ಗಾವಣೆ ಮಾಡತಕ್ಕದ್ದು. ಇದೇ ರೀತಿ ಶಿಸ್ತು ಪ್ರಕರಣಗಳಲ್ಲಿಯೂ ಸಿಬ್ಬಂದಿ/ನೌಕರರನ್ನು ತಕ್ಷಣವೇ ಆ ಸ್ಥಳದಿಂದ ಬೇರೆ ಜಿಲ್ಲೆಗಳಿಗೆ ವರ್ಗಾವಣೆ ಮಾಡತಕ್ಕದ್ದು.

8) ಎ). ಗ್ರೂಪ್-ಡಿ ವರ್ಗದ ಸಿಬ್ಬಂದಿಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಸಿಬ್ಬಂದಿಗಳನ್ನು ವರ್ಗಾಯಿಸುವ ಸಕ್ಷಮ ಪ್ರಾಧಿಕಾರ ಸರ್ಕಾರ ಆಗಿರುತ್ತದೆ.

ಬಿ). ಗ್ರೂಪ್-ಡಿ ವರ್ಗದ ಸಿಬ್ಬಂದಿಗಳನ್ನು ವರ್ಗಾಯಿಸುವ ಸಕ್ಷಮ ಪ್ರಾಧಿಕಾರ, ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರು ಆಗಿರುತ್ತಾರೆ.

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕಾರ್ಯನಿರ್ವಾಹಕ ನಿರ್ದೇಶಕರು ಕ್ರ.ಸಂ. 8(ಎ)ರಲ್ಲಿರುವ ಪ್ರಕರಣಗಳ ಬಗ್ಗೆ ಪ್ರತಿ ವರ್ಷವು ಏಪ್ರಿಲ್/ಮೇ ಮಾಹೆಯಲ್ಲಿ ಮಾತ್ರ ವರ್ಗಾವಣೆ ಮಾರ್ಗಸೂಚಿಗಳಂತೆ ಅರ್ಹ ಪ್ರಕರಣಗಳನ್ನು ಪರಿಶೀಲಿಸಿ, ಸಿಬ್ಬಂದಿಗಳ ಆಯ್ಕೆಗನುಸಾರ ಸರ್ಕಾರಕ್ಕೆ ವರ್ಗಾವಣೆ ಪ್ರಸ್ತಾವನೆಗಳನ್ನು ಸಲ್ಲಿಸಿ, ವರ್ಗಾವಣೆ ಪ್ರಕ್ರಿಯೆಯನ್ನು ಪೂರ್ಣಗೊಳಿಸುವುದು. ಅದೇರೀತಿ ಕ್ರ.ಸಂ.8(ಬಿ)ರಲ್ಲಿರುವ ಸಿಬ್ಬಂದಿಗಳ ವರ್ಗಾವಣೆಗಳನ್ನು ಸಹ ಏಪ್ರಿಲ್/ಮೇ ಮಾಹೆಯಲ್ಲಿ/ ಶೈಕ್ಷಣಿಕ ವರ್ಷದ ಆರಂಭಕ್ಕೆ ಮುಂಚಿತವಾಗಿ ವರ್ಗಾವಣೆ ಪ್ರಕ್ರಿಯೆಯನ್ನು ಪೂರ್ಣಗೊಳಿಸುವುದು.

9) ಪರಸ್ಪರ ಹಾಗೂ ಕೋರಿಕೆ ವರ್ಗಾವಣೆಗಳ ಪ್ರಕರಣಗಳಲ್ಲಿ ವರ್ಗಾವಣೆ ಭತ್ಯೆಗಳನ್ನು ಪಡೆಯಲು ಅರ್ಹರಿರುವುದಿಲ್ಲ. ಆದರೆ ಸಾರ್ವಜನಿಕ ಹಿತದೃಷ್ಟಿಯಿಂದ ಮಾಡಲ್ಪಟ್ಟ ವರ್ಗಾವಣೆಗಳಲ್ಲಿ ಮಾತ್ರ ವರ್ಗಾವಣೆ-ಭತ್ಯೆಯನ್ನು ನೀಡಬಹುದಾಗಿದೆ.

10) ವರ್ಗಾವಣೆಯಾದ ಪ್ರಕರಣಗಳಲ್ಲಿ ಸಿಬ್ಬಂದಿಗಳು ವರ್ಗಾವಣೆಗೊಂಡ ಸ್ಥಳಕ್ಕೆ ಸೇರುವಿಕೆ ಕಾಲ (Joining time) 10 ದಿನಗಳ ಒಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಹಾಜರಾಗದಿದ್ದಲ್ಲಿ ಅಂತಹವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸತಕ್ಕದ್ದು.

11) ವರ್ಗಾವಣೆ ಮಾರ್ಗಸೂಚಿಗಳನ್ನು ಎಲ್ಲಾ ವಸತಿ ಶಾಲೆ/ಕಾಲೇಜಿನ ಸೂಚನ ಫಲಕ ಹಾಗೂ ಸಂಘದ ಕೇಂದ್ರ ಕಛೇರಿಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸತಕ್ಕದ್ದು.

12) ಪತಿ-ಪತ್ನಿ ಪ್ರಕರಣಗಳಲ್ಲಿ ಅವರ ಆಯ್ಕೆಯನುಸಾರ ಒಬ್ಬರಿಗೆ ಮಾತ್ರ ವಸತಿ ಶಾಲೆ/ಕಾಲೇಜಿನಲ್ಲಿ ಲಭ್ಯವಿರುವ ವಸತಿ ಗೃಹವನ್ನು ಹಂಚಿಕೆ ಮಾಡತಕ್ಕದ್ದು.

([illegible]ಲಿಂಗಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

******